ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)

ಸಂಪುಟ: ೦೭
ಸಂಚಿಕೆ: ೦೪

೨೮ (ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಅಕ್ಟೋಬರ್-ಡಿಸೆಂಬರ್ ೨೦೧೩

ಸಂಪಾದಕರು
ಎಸ್.ವಿ. ಶ್ರೀನಿವಾಸರಾವ್



## ಪರಿವಿಡಿ



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೮೭೭,೨೬೬೭೬೭೭೩
ಇಮೇಲ್ :
bmsritrust@gmail.com
ಶಾಖೆ
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ॥ಮಂಡ್ಯ ಜಿಲ್ಲೆ.

## ದಿನಾಂಕ : ೮-೧೧-೨೦೧೩ ರಂದು ತುಮಕೂರು ವಿಶ್ವವಿದ್ಯಾನಿಲಯದ ಸರ್. ಎಂ. ವಿಶ್ವೇಶ್ವರಯ್ಯ ಸಭಾಭವನದಲ್ಲಿ ನಡೆದ ಮೂರನೆಯ ರಾಷ್ಟ್ರೀಯ ಹಸ್ತಪ್ರತಿ ಅಧ್ಯಯನ ಸಮಾವೇಶ

## ಸಂಪಾದಕೀಯ

ಈ ಕೆಳಕಂಡವರು ೨೫-೧೨-೨೦೧೩ ರಂದು ನಡೆದ ಸರ್ವಸದಸ್ಯರ ಸಭೆಯಲ್ಲಿ ೩ ವರ್ಷಗಳ ಅವಧಿಗೆ ಕಾರ್ಯಕಾರಿ ಸಮಿತಿ ಸದಸ್ಯರುಗಳಾಗಿ ಆಯ್ಕೆಗೊಂಡಿರುತ್ತಾರೆ : ೧. ಡಾ॥ ಪಿ. ವಿ. ನಾರಾಯಣ ೨. ಎಸ್. ವಿ ಶ್ರೀನಿವಾಸರಾವ್ ೩. ಪ್ರೊ॥ ಜಿ. ಅಬ್ದುಲ್ ಬಷೀರ್ ೪. ಎಂ. ಎಸ್. ರಾಮಪ್ರಸಾದ್ ೫. ಪ್ರೊ॥ ಅ. ರಾ. ಮಿತ್ರ ೬. ಪ್ರೊ॥ ಟಿ. ಎಸ್. ನಾಗಭೂಷಣ ೭. ಶ್ರೀ ಬಿ. ಆರ್. ರವೀಂದ್ರನಾಥ ೮. ಎಚ್. ಶೇಷಗಿರಿರಾವ್ ೯. ಡಾ॥ ಜಯಮ್ಮ ಕರಿಯಣ್ಣ ೧೦. ಡಾ॥ ವಿಜಯಾ ಸುಬ್ಬರಾಜ್ ೧೧. ಪ್ರೊ॥ ಅನಿಲ್ ಕುಮಾರ್ ೧೨. ಡಾ॥ ಎಂ. ಜಿ. ನಾಗರಾಜ್ ೧೩. ರಾ. ನಂ. ಚಂದ್ರಶೇಖರ್ ೧೪. ಡಾ॥ ಕೆ. ಆರ್. ಗಣೇಶ್ ೧೫. ಶ್ರೀ ಡಿ. ನಂ. ವೆಂಕಟರಮಣಯ್ಯ ೧೬. ಡಾ॥ ಆರ್. ಲಕ್ಷ್ಮೀನಾರಾಯಣ.

ಪ್ರತಿಷ್ಠಾನದ ಮಾನ್ಯ ಸದಸ್ಯರುಗಳಿಗೆ ಗುರುತಿನ ಚೀಟಿಯನ್ನು ಕೊಡಲು ಸರ್ವ ಸದಸ್ಯ ಸಭೆಯು ಸೂಚಿಸಿರುವುದರಿಂದ ಎಲ್ಲಾ ಸದಸ್ಯರನ್ನು ಈ ಕೆಳಕಂಡ ಅರ್ಜಿಫಾರಂ ಭರ್ತಿ ಮಾಡಿ ವಿವರಗಳನ್ನು ಪ್ರತಿಷ್ಠಾನಕ್ಕೆ ಶೀಘ್ರವೇ ಸಲ್ಲಿಸಲು ವಿನಂತಿಸಿಕೊಳ್ಳುತ್ತಿದ್ದೇವೆ. (ಪ್ರತಿ ಲಗತ್ತಿಸಿದೆ).

ಬಿ.ಎಂ.ಶ್ರೀ. ಅವರ ಮೊಮ್ಮಗಳಾದ ಶ್ರೀಮತಿ ಕಮಲಿನಿ ಶಾ ಬಾಲುರಾವ್ ಅವರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ೧೫ ಲಕ್ಷ ರೂ.ಗಳ ದತ್ತಿಯೊಂದನ್ನು ಸ್ಥಾಪಿಸಿ, ಪ್ರತಿವರ್ಷವೂ ಬಿ.ಎಂ.ಶ್ರೀ. ಅವರ ನೆನಪಿನಲ್ಲಿ ಜನವರಿ ತಿಂಗಳಲ್ಲಿ ೧ ಲಕ್ಷ ರೂ.ಗಳ ಪ್ರಶಸ್ತಿಯನ್ನು ನಾಡಿನ ಖ್ಯಾತ ಸಾಹಿತಿಯೊಬ್ಬರಿಗೆ ನೀಡಲು ಇಚ್ಚಿಸಿರುತ್ತಾರೆ. ಈ ಸಾರಿ ಪ್ರತಿಷ್ಠಿತ ಪ್ರಶಸ್ತಿಯನ್ನು ಮಾರ್ಚ್/ಏಪ್ರಿಲ್ ತಿಂಗಳಲ್ಲಿ ನೀಡುವ ಸಲುವಾಗಿ ಸೂಕ್ತ ಸಿದ್ಧತೆ ನಡೆಸಿದೆ ಎಂದು ತಿಳಿಸಲು ಹರ್ಷಿಸುತ್ತೇವೆ.

ಬಿ.ಎಂ.ಶ್ರೀ. ಅವರ ಕೆಲ ಅಮೂಲ್ಯ ವಸ್ತುಗಳನ್ನು ಶ್ರೀಮತಿ ಕಮಲಿನಿಯವರು ಪ್ರತಿಷ್ಠಾನಕ್ಕೆ ನೀಡಿದ್ದು ಅವುಗಳ ಪ್ರದರ್ಶನಕ್ಕೆ ಏರ್ಪಾಡು ಮಾಡಲಾಗಿದೆ. ಸಾಹಿತ್ಯಾಸಕ್ತರು ಪ್ರತಿಷ್ಠಾನದ ಸಭಾಂಗಣದಲ್ಲಿ ಇವುಗಳನ್ನು ಅವಲೋಕಿಸಬಹುದಾಗಿದೆ.

*ಆತ್ಮೀಯ ಬಂಧುಗಳೇ,*

ತಮ್ಮೆಲ್ಲರಿಗೂ ಶುಭ ಸಂಕ್ರಾಂತಿಯ ಹಾರ್ದಿಕ ಶುಭಾಶಯಗಳು. ನಾನು ನನ್ನ ವೈಯಕ್ತಿಕ ಕಾರಣ ಗಳಿಂದಾಗಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಕಾರ್ಯದರ್ಶಿ ಹಾಗೂ ವಾರ್ತಾಪತ್ರದ ಸಂಪಾದಕತ್ವಕ್ಕೆ ರಾಜೀನಾಮೆ ನೀಡುತ್ತಿದ್ದೇನೆ. ಸುಮಾರು ೧೯೯೦ ರಿಂದ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾ, ೨೦೦೪ ರಲ್ಲಿ ನಡೆದ ರಜತೋತ್ಸವದ ಸಮಾರಂಭದ ಉಸ್ತುವಾರಿಯನ್ನು ಸಂಚಾಲಕನಾಗಿ, 'ರಜತಸಿರಿ'ಯ ಸಂಪಾದಕನಾಗಿ, ೬ ವರ್ಷ ವಿದ್ವತ್ ಪತ್ರಿಕೆ 'ಕರ್ನಾಟಕ ಲೋಚನ'ದ ಸಂಪಾದಕನಾಗಿ, ೬ ವರ್ಷಕ್ಕೂ ಹೆಚ್ಚು ಕಾಲ ವ್ಯವಸ್ಥಾಪಕ ಕಾರ್ಯದರ್ಶಿಯಾಗಿ ನಿಷ್ಪೃಹ ಸೇವೆ ಸಲ್ಲಿಸಿದ್ದೇನೆ ಎಂಬ ತೃಪ್ತಿಯಿಂದ ನಿರ್ಗಮಿಸು ತ್ತಿದ್ದೇನೆ. ಈ ಸೇವೆ ಸ್ವೀಕರಿಸಿದ ತಮ್ಮೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ. ತಾವು ನನಗಿತ್ತ ಸಹಕಾರ, ಸಹಯೋಗವನ್ನು ಮುಂದಿನ ಕಾರ್ಯದರ್ಶಿಗೂ ನೀಡಬೇಕೆಂದು ವಿನಮ್ರವಾಗಿ ವಿನಂತಿಸಿಕೊಳ್ಳುತ್ತಿದ್ದೇನೆ.

ವಂದನೆಗಳು,

**–ಎಸ್. ವಿ. ಶ್ರೀನಿವಾಸರಾವ್**
ಸಂಪಾದಕರು

# ಪ್ರತಿಷ್ಠಾನದ ವಾರ್ತೆ

## ಅಕ್ಟೋಬರ್ ತಿಂಗಳ ಕಾರ್ಯಕ್ರಮಗಳು

| ಕ್ರ.ಸಂ. | ಕಾರ್ಯಕ್ರಮಗಳು | ದಿನಾಂಕ | ಅಧ್ಯಕ್ಷರು | ಉಪನ್ಯಾಸಕರು | ವಿಷಯ |
|---|---|---|---|---|---|
| 1. | ಸಿರಿ ಸಂಗೀತ ತಿಂಗಳ ಕಾರ್ಯಕ್ರಮ (A) | 26–10–2013 ಸಂಜೆ 6–00 | ಡಾ॥ ಪಿ.ವಿ. ನಾರಾಯಣ | ಗಾಯಕರು : ವಿದ್ವಾನ್ ರಾವ್ ಆರ್. ಶರತ್ ಮತ್ತು ಸಂಗಡಿಗರು | ಶಾಸ್ತ್ರೀಯ ಸುಗಮ ಸಂಗೀತ |
| 2. | ಡಾ॥ ಡಿ.ವಿ. ಗುಂಡಪ್ಪ ಸ್ಮಾರಕ ದತ್ತಿ (B) | 28–10–2013 ಸಂಜೆ 6–00 | ಡಾ॥ ಪಿ.ವಿ. ನಾರಾಯಣ | ಉಪನ್ಯಾಸಕರು : ಪ್ರೊ॥ ಕೆ. ಎಸ್. ಮಧುಸೂದನ | ಡಿ.ವಿ.ಜಿ. ಯವರ ಮಂಕುತಿಮ್ಮನ ಕಗ್ಗ |
| 3. | ಶ್ರೀ ಸೋಸಲೆ ಅಯ್ಯಶಾಸ್ತ್ರಿ ಸ್ಮಾರಕ ದತ್ತಿ | 31–10–2013 ಸಂಜೆ 6–00 | ಡಾ॥ ಪಿ.ವಿ. ನಾರಾಯಣ | ಉಪನ್ಯಾಸಕರು : ಪ್ರೊ॥ ಬಿ.ಸಿ. ರಾಜಕುಮಾರ್ | ಸಂಸರ ನಾಟಕಗಳು |
| | | **ನವಂಬರ್ ತಿಂಗಳ ಕಾರ್ಯಕ್ರಮಗಳು** | | | |
| 4. | ೩ನೇ ರಾಷ್ಟ್ರೀಯ ಹಸ್ತಪ್ರತಿ ಅಧ್ಯಯನ ಸಮಾವೇಶ (*) | 8–11–2013 ಬೆಳಿಗ್ಗೆ 10ಕ್ಕೆ ತುಮಕೂರು ವಿ.ವಿ.ಸರ್‌ಎಂ. ವಿಶ್ವೇಶ್ವರಯ್ಯ ಸಭಾಂಗಣ | ಉದ್ಘಾಟನೆ: ಪ್ರೊ॥ ಎ. ಹೆಚ್. ರಾಜಾಸಾಬ್, ವಿ.ವಿ. ಕುಲಪತಿಗಳು. ಸರ್ವಾಧ್ಯಕ್ಷರು: ಪ್ರೊ॥ ಜಿ.ಜಿ. ಮಂಜುನಾಥನ್ ಅಧ್ಯಕ್ಷತೆ: ಪ್ರೊ॥ಎಂ.ಎಚ್. ಕೃಷ್ಣಯ್ಯ 'ಸಮಾರೋಪ' ಸಂಜೆ 4 ಅಧ್ಯಕ್ಷರು: ಡಾ॥ ಪಿ.ವಿ. ನಾರಾಯಣ, ಮುಖ್ಯ ಅತಿಥಿಗಳು:ಡಾ॥ ದೇವರ ಕೊಂಡಾರೆಡ್ಡಿ, ಡಾ॥ ಬಿ. ನಂಜುಂಡಸ್ವಾಮಿ | ಡಾ॥ ನಿತ್ಯಾನಂದಶೆಟ್ಟಿ ಅಧ್ಯಕ್ಷರು, ಡಿ.ವಿ.ಜಿ. ಕನ್ನಡ ಅಧ್ಯಯನ ಕೇಂದ್ರ, ತುಮಕೂರು<br><br>ಸ್ವಾಗತ: ಡಾ॥ ಪಿ.ವಿ. ಕೃಷ್ಣಮೂರ್ತಿ<br><br>ವಂದನಾರ್ಪಣೆ: ಡಾ॥ ಪರಶಿವಮೂರ್ತಿ | ಹಸ್ತಪ್ರತಿ ಅಧ್ಯಯನ ಸಂಪುಟ ೨ ಬಿಡುಗಡೆ ಡಾ॥ ಡಿ.ವಿ. ಪರಮಶಿವಮೂರ್ತಿ, ಪ್ರಾಧ್ಯಾಪಕರು ಗೋಷ್ಠಿಗಳು ಬೆಳಿಗ್ಗೆ ೧೧–೩೦ ರಿಂದ ೪ರ ವರೆಗೆ ೩೦ ಸಂಶೋಧಕರು ಪ್ರಬಂಧ ಮಂಡಿಸಿದರು. |
| 5. | ಸಿರಿ ಸಂಗೀತ ತಿಂಗಳ ಕಾರ್ಯಕ್ರಮ | 9–11–2013 ಸಂಜೆ 6–00 | ಡಾ॥ ಪಿ.ವಿ. ನಾರಾಯಣ | ವಿದ್ವಾನ್ ಶ್ರೀ ರಘುಪತಿ ಹೆಗಡೆ ಮತ್ತು ಸಂಗಡಿಗರು | ಉತ್ತರಾದಿ ಸಂಗೀತ |
| 6. | ಸಂಕ್ಷಿಪ್ತ ಪಂಪಭಾರತ ತರಗತಿಗಳ ಉದ್ಘಾಟನೆ | 23–11–2013 ಸಂಜೆ 6–00 | ಡಾ॥ ಪಿ.ವಿ. ನಾರಾಯಣ | ಡಾ॥ ಕೆ.ಆರ್. ಗಣೇಶ್ ಅವರಿಂದ ತರಗತಿಗಳಿಗೆ ಚಾಲನೆ | ಪ್ರತಿ ಶನಿವಾರ ಸಂಜೆ ೬ ರಿಂದ ನಡೆಯಲಿದೆ. ಅವಧಿ ೩ ತಿಂಗಳು. |
| 7. | ಕಣಕಟ್ಟೆಕೃಷ್ಣಮೂರ್ತಿ ರಾವ್ ದತ್ತಿ ಮತ್ತು ಸಿರಿಸಂಗೀತ | 28–11–2013 ಸಂಜೆ 6–00 | ಎಸ್.ವಿ.ಶ್ರೀನಿವಾಸರಾವ್ ಗಾಯಕರನ್ನು ಅಭಿನಂದಿಸಿ ನೆನಪಿನ ಕಾಣಿಕೆ ನೀಡಿದರು. | ವಿದುಷಿ ಜ್ಯೋತಿ ಅಶ್ವತ್ಥನಾರಾಯಣ | ಅಭಿನಂದಿಸಿ ಸನ್ಮಾನಿಸಲಾಯಿತು ಕರ್ನಾಟಕ ಶಾಸ್ತ್ರೀಯ ಸಂಗೀತ |

| ಕ್ರಸಂ. | ಕಾರ್ಯಕ್ರಮಗಳು | ದಿನಾಂಕ | ಅಧ್ಯಕ್ಷರು | ಉಪನ್ಯಾಸಕರು | ವಿಷಯಗಳು |
|---|---|---|---|---|---|
| 8. | ಶಂಬಾ ಜೋಶಿ, ವಿ.ಸೀ. ಪ್ರೊ॥ ರಾಮಸ್ವಾಮಿ ಮತ್ತು ಬೇಟೆರಾಯ ದೀಕ್ಷಿತ್ ದತ್ತಿ | 30–11–2013 ಸಂಜೆ 6–00 | ಡಾ॥ ದೇವರಕೊಂಡಾ ರೆಡ್ಡಿ | ಡಾ॥ ಜಯಮ್ಮ ಕರಿಯಣ್ಣ | ಉಪನ್ಯಾಸ : ನೊಳಂಬ ರಾಣಿಯವರ ಸಾಮಾಜಿಕ ಕೊಡುಗೆ |
| | **ಡಿಸೆಂಬರ್ ತಿಂಗಳ ಕಾರ್ಯಕ್ರಮಗಳು** | | | | |
| 9. | 'ಪ್ರೊ॥ ಚಿ. ಶ್ರೀನಿವಾಸರಾಜು ನೆನಪು'. ಸಹಯೋಗ ಸಾಹಿತ್ಯ ಅಕಾದೆಮಿ ಬೆಂಗಳೂರು | 1–12–2013 ಬೆಳಿಗ್ಗೆ 10–00 ಗಂಟೆಯಿಂದ | ಪ್ರಾಸ್ತಾವಿಕ ನುಡಿ ಡಾ॥ ಪಿ.ವಿ. ನಾರಾಯಣ | ಪ್ರೊ॥ ಎನ್.ಬಿ. ಚಂದ್ರ ಮೋಹನ್ (ಚಿ. ಶ್ರೀನಿವಾಸರಾಜು ನೆನಪು). ಗಣ್ಯ ಅತಿಥಿ ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ ಅಧ್ಯಕ್ಷತೆ : ಪ್ರೊ॥ ಎಂ. ಎಚ್. ಕೃಷ್ಣಯ್ಯ ಸಾಹಿತ್ಯ ಅಕಾದೆಮಿ ಆಫೀಸರ್ ಇನ್‌ಛಾರ್ಜ್ ಶ್ರೀ ಎಸ್. ಪಿ. ಮಹಾಲಿಂಗೇಶ್ವರ್ ವಂದನಾರ್ಪಣೆ ಸಲ್ಲಿಸಿದರು. ಪ್ರೊ॥ ಚಿ. ಶ್ರೀನಿವಾಸರಾಜು ಅವರ ಭಾವಚಿತ್ರವನ್ನು ಅನಾವರಣ ಮಾಡಿದರು. | **ಗೋಷ್ಠಿ–೧ಕಾವ್ಯ ಹಿರಿಯರ ನೆಲೆ** ಡಾ॥ ವಿಕ್ರಂ ವಿಸಾಜಿ, ಗುಲ್ಬರ್ಗಾ **ಕಿರಿಯರ ಬೆಳೆ :** ಆನಂದ ಝುಂಝುರವಾಡ, ಮುಧೋಳ **ಗೋಷ್ಠಿ–೨:ಸಣ್ಣ ಕಥೆ :** ಹಿರಿಯರ ನೆಲೆ : ಡಾ॥ ಅಮರೇಶ ನುಗಡೋಣಿ, ಹಂಪಿ ಕಿರಿಯರ ಬೆಳೆ : ಶ್ರೀ ವಿಕ್ರಂ ಹತ್ವಾರ್, ಬೆಂಗಳೂರು **ಗೋಷ್ಠಿ–೩ : ಕಾದಂಬರಿ** ಹಿರಿಯರ ನೆಲೆ : ಡಾ॥ ಕೆ. ಸತ್ಯನಾರಾಯಣ ಕಿರಿಯರ ಬೆಳೆ : ಡಾ॥ ಎಚ್. ಎಸ್. ರಾಘವೇಂದ್ರರಾವ್ **ಗೋಷ್ಠಿ–೪ : ನಾಟಕ** ಹಿರಿಯರ ನೆಲೆ : ಶ್ರೀ ಕೆ.ವೈ. ನಾರಾಯಣಸ್ವಾಮಿ. ಕಿರಿಯರ ಬೆಳೆ: ಶ್ರೀ ನಟರಾಜ ಹೊನ್ನವಳ್ಳಿ, ಸಾಣೇಹಳ್ಳಿ |
| 10. | ಪ್ರೊ॥ ವಿ. ಎಂ. ಇನಾಂದಾರ್– ನೂರೊಂದು ನೆನಪು ಹಾಗೂ ಕಾದಂಬರಿ ಲೋಕ ಲೋಕಾರ್ಪಣೆ | 16–12–2013 ಸಂಜೆ 5–30 | ಪ್ರೊ॥ ಎಂ. ಎಚ್. ಕೃಷ್ಣಯ್ಯ | ಡಾ॥ ವಿಜಯಾ ಸುಬ್ಬರಾಜ್ ಡಾ॥ ಜಿ. ಬಿ. ಹರೀಶ್. ಶ್ರೀಮತಿ ಮೀನಾ ವಾಂಗೀಕರ್ (ಇನಾಂದಾರ್ ಅವರ ಮಗಳು) ಡಾ॥ ಪಿ.ವಿ.ನಾರಾಯಣ ಎಲ್ಲರನ್ನೂ ವಂದಿಸಿ ನೆನಪಿನ ಕಾಣಿಕೆನೀಡಿದರು. | ಇನಾಂದಾರ್‌ಕಾದಂಬರಿಗಳು ಇನಾಂದಾರ್‌ವಿಮರ್ಶೆಯ ಬರಹಗಳು ತಂದೆಯ ಬಗ್ಗೆ ಮಾತನಾಡಿದರು. |
| 11. | ಎನ್. ಬಸವಾರಾಧ್ಯ ಅವರ ಶ್ರದ್ಧಾಂಜಲಿ | 21–12–2013 ಸಂಜೆ 5–30 | ಪ್ರೊ॥ ಎಂ. ಎಚ್. ಕೃಷ್ಣಯ್ಯ | ಭಾಗವಹಿಸಿದ್ದವರು : ಪ್ರೊ॥ ಜಿ.ಎಸ್. ಸಿದ್ದಲಿಂಗಯ್ಯ ಪ್ರೊ॥ ಅ.ರಾ. ಮಿತ್ರ, ಡಾ॥ ಸಿ. ವೀರಣ್ಣ, ಶ್ರೀ ಹೀ.ಚಿ. ಶಾಂತವೀರಯ್ಯ, ಪ್ರೊ॥ ಅಶ್ವತ್ಥನಾರಾಯಣ | ಶ್ರದ್ಧಾಂಜಲಿ ಅರ್ಪಿಸಿದರು |

| ಕ್ರಸಂ. | ಕಾರ್ಯಕ್ರಮಗಳು | ದಿನಾಂಕ | ಅಧ್ಯಕ್ಷರು | ಉಪನ್ಯಾಸಕರು | ವಿಷಯಗಳು |
|---|---|---|---|---|---|
| 12. | ಕಾಳಿಂಗರಾವ್ ಬಳಗ ದತ್ತಿ; ಮತ್ತು ಎಂ.ವಿ.ಸೀ. ಕನ್ನಡ ದತ್ತಿ ಕಾರ್ಯ ಕ್ರಮ ಅಖಿಲ ಕರ್ನಾಟಕ ಸುಗಮ ಸಂಗೀತ ಸ್ಪರ್ಧೆಗಳು | 22–12–2013 ಸಂಜೆ 6–00 | ಶ್ರೀ ಯಶವಂತ ಹಳಿಬಂಡಿ. ಪ್ರೊ॥ ಜಿ. ಅಬ್ದುಲ್ ಬಷೀರ್ ಬಹುಮಾನ ವಿತರಣೆ. | ಮುಖ್ಯ ಅತಿಥಿಗಳು : ಶ್ರೀ ಎಂ. ಆರ್. ಅನಂತಮೂರ್ತಿ ಶ್ರೀ ನಾರಾಯಣರಾವ್ ಮಾನೆ, ಶ್ರೀಮತಿ ವೇದವತಿ, ಪ್ರಸನ್ನಕುಮಾರ್, ಶ್ರೀಮತಿ ಜ್ಯೋತಿ ನಾಗರಾಜ | ಸಂಚಾಲಕರು ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ, ವಿದುಷಿ ಸುಕನ್ಯಾ ವಿಜಯಕುಮಾರ್ ಶ್ರೀ ಪಾರ್ಥಸಾರಥಿ ಎಂ. ಸುಮಾರು ೨೫ ಜನ ಅಭ್ಯರ್ಥಿಗಳು ಭಾಗವಹಿಸಿದ್ದರು. ಇವರಿಗೆ ಲಘುಭೋಜನವನ್ನು ಏರ್ಪಡಿಸಲಾಗಿತು. ವಿಜಯೀ ಗಾಯಕರಿಗೆ ಬಹುಮಾನ ವಿತರಿಸಲಾಯಿತು. |
| 13. | ಸಿರಿಸಂಗೀತ ತಿಂಗಳ ಕಾರ್ಯಕ್ರಮ | 28–12–2013 ಬೆಳಿಗ್ಗೆ 10–00 ಗಂಟೆಯಿಂದ | ಶ್ರೀ ಎಸ್. ವಿ. ಶ್ರೀನಿವಾಸರಾವ್ ಪ್ರತಿಷ್ಠಾನದ ನೆನಪಿನ ಕಾಣಿಕೆಯನ್ನು ಅತಿಥಿ ಗಳಿಗೆ ಸಲ್ಲಿಸಿದರು | ವಿದುಷಿ ಶ್ರೀಮತಿ ಗಿರಿಜಾಶಾಸ್ತ್ರೀ ಮತ್ತು ವೃಂದದವರಿಂದ | ಉಪಶಾಸ್ತ್ರೀಯ ಸಂಗೀತ |
| 14. | ಪ್ರೊ॥ ತೀ. ನಂ. ಶ್ರೀಕಂಠಯ್ಯ, ಡಾ॥ ಡಿ. ಎಲ್. ನರಸಿಂಹಾಚಾರ್ ಮತ್ತು ಡಾ॥ ಎಂ. ಎ. ಜಯಚಂದ್ರ ದತ್ತಿ | 30–12–2013 | ಡಾ॥ ಪಿ.ವಿ. ನಾರಾಯಣ | ಡಾ॥ ಕೆ. ಆರ್. ಗಣೇಶ | ಆಂಡಯ್ಯನ ಕಬ್ಬಿಗರ ಕಾವ ಬಗ್ಗೆ ಉಪನ್ಯಾಸ ನೀಡಿದರು. |

* **ಷರಾ** : ೧. ಹಸ್ತಪ್ರತಿ ಅಧ್ಯಯನ ಸಮಾವೇಶದಲ್ಲಿ ಹಸ್ತಪ್ರತಿಗಳ ಪ್ರದರ್ಶನ ಹಾಗೂ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಪ್ರಕಟಿಸಿರುವ ಪುಸ್ತಕಗಳ ಪ್ರದರ್ಶನ ಏರ್ಪಡಿಸಲಾಗಿತ್ತು. ನೂರಾರು ವಿದ್ಯಾರ್ಥಿಗಳು ಇವನ್ನು ದರ್ಶಿಸಿ ಹಸ್ತಪ್ರತಿಗಳ ಬಗ್ಗೆ ಮಾಹಿತಿ ಸಂಗ್ರಹಿಸಿದರು. ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಪ್ರತಿಷ್ಠಾನದ ಪ್ರಕಟಣೆಗಳು ಮತ್ತು 'ಕರ್ನಾಟಕ ಲೋಚನ' (ಸಮಗ್ರ ಸಂಪುಟಗಳು) ತುಮಕೂರು ವಿಶ್ವವಿದ್ಯಾನಿಲಯಕ್ಕೆ ಕೊಡುಗೆಯಾಗಿ ನೀಡಿದರು. ಬೆಳಗ್ಗೆ ಡಾ॥ ಪಿ. ವಿ. ಕೃಷ್ಣಮೂರ್ತಿ ಸ್ವಾಗತಿಸಿದರು. ಕೊನೆಯಲ್ಲಿ ಡಾ॥ ಪರಶಿವಮೂರ್ತಿ ವಂದಿಸಿದರು. ಪ್ರಾರಂಭದಲ್ಲಿ ಡಾ॥ ಪಿ. ವಿ. ನಾರಾಯಣ ಪ್ರಸ್ತಾವಿಕ ಭಾಷಣದಲ್ಲಿ 'ಹಸ್ತಪ್ರತಿ' ಬಗ್ಗೆ ಪೂರ್ಣ ಮಾಹಿತಿ ನೀಡಿದರು.

ಷರಾ : ೨. ಮೇಲ್ಕಂಡ ಎಲ್ಲಾ ಕಾರ್ಯಕ್ರಮಗಳಿಗೆ ಗೌ॥ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಸ್ವಾಗತಿಸಿದರು. ಪ್ರೊ॥ ಜಿ. ಅಬ್ದುಲ್ ಬಷೀರ್ ಅತಿಥಿಗಳ ಪರಿಚಯ ಮಾಡಿಕೊಟ್ಟರು. ಅಧ್ಯಕ್ಷರು ಎಲ್ಲರನ್ನೂ ವಂದಿಸಿ ಅತಿಥಿಗಳಿಗೆ ನೆನಪಿನ ಕಾಣಿಕೆಗಳನ್ನು ನೀಡಿದರು.




ದಿನಾಂಕ : 26-10-2013ರಂದು ಸಿರಿ ಸಂಗೀತ ಕಾರ್ಯಕ್ರಮ ವಿದ್ವಾನ್ ರಾವ್ ಆರ್. ಶರತ್ ಮತ್ತು ಸಂಗಡಿಗರು **(A)**




ದಿನಾಂಕ : 28-10-2013 ರಂದು ಡಾ॥ ಡಿ. ವಿ. ಗುಂಡಪ್ಪ ಸ್ಮಾರಕ ದತ್ತಿ ಕಾರ್ಯಕ್ರಮ **(B)**




ದಿನಾಂಕ : 28-11 2013 ರಂದು ಸಿರಿ ಸಂಗೀತ ಕಾರ್ಯಕ್ರಮ ವಿದುಷಿ ಜ್ಯೋತಿ ಅಶ್ವತ್ಥನಾರಾಯಣ ಮತ್ತು ವೃಂದದವರಿಂದ (7)




ದಿನಾಂಕ : 30-11 2013 ರಂದು ವಿ.ಸೀ. ಪ್ರೊ॥ ರಾಮಸ್ವಾಮಿ ಮತ್ತು ಬೇಟೆರಾಯ ದೀಕ್ಷಿತ್ ದತ್ತಿ ಕಾರ್ಯಕ್ರಮ (8)




ದಿನಾಂಕ : 1-12-2013 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಹಕಾರ ಸಾಹಿತ್ಯ ಅಕಾಡೆಮಿ ಪ್ರೊ॥ ಚಿ. ಶ್ರೀನಿವಾಸರಾಜು-ನೆನಪು (9)



ದಿನಾಂಕ : 1-12-2013 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಹಕಾರ ಸಾಹಿತ್ಯ ಅಕಾಡೆಮಿ ಪ್ರೊ॥ ಚಿ. ಶ್ರೀನಿವಾಸರಾಜು-ನೆನಪು (9)




ದಿನಾಂಕ : 16-12-2013 ರಂದು ವಿ. ಸೀ. ಸಂಪದ
ಪ್ರೊ॥ ವಿ. ಎಂ. ಇನಾಂದಾರ್-ನೂರೊಂದು ನೆನಪು (10)



ದಿನಾಂಕ : 21-12-2013 ರಂದು ಎನ್. ಬಸವಾರಾಧ್ಯ ಅವರ
ಶ್ರದ್ಧಾಂಜಲಿ ಕಾರ್ಯಕ್ರಮ (11)



ದಿನಾಂಕ : 22-12 2013 ರಂದು ಕಾಳಿಂಗರಾವ್ ಬಳಗ ದತ್ತಿ ಮತ್ತು
ಎಂ.ವಿ.ಸೀ. ಕನ್ನಡ ದತ್ತಿ ಕಾರ್ಯಕ್ರಮ (12)




ದಿನಾಂಕ 28.12.13ರಂದು ಸಿರಿಸಂಗೀತ ಕಾರ್ಯಕ್ರಮ
ವಿದುಷಿ ಶ್ರೀಮತಿ ಗಿರಿಜಾಶಾಸ್ತ್ರಿ ಮತ್ತು ವೃಂದದವರಿಂದ (13)




ದಿನಾಂಕ : 13-12-2013ರಂದು ತೀ.ನಂ. ಶ್ರೀಕಂಠಯ್ಯ
ಡಾ.ಡಿ.ಎಲ್. ನರಸಿಂಹಾಚಾರ್ ಮತ್ತು ಡಾ. ಡಿ.ಎಂ. ಜಯಚಂದ್ರ
ದತ್ತಿ ಕಾರ್ಯಕ್ರಮ (14)

## ಶ್ರದ್ಧಾಂಜಲಿ

೧. ೨೨-೧೧-೧೩ ಗಾಂಧಿವಾದಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಸಾಹಿತಿ ಶ್ರೀ ನೀಲತ್ತಹಳ್ಳಿ ಕಸ್ತೂರಿ ಅವರು ನಿಧನರಾದರು.

೨. ೬-೧೨-೨೦೧೩ **ಎನ್. ಬಸವಾರಾಧ್ಯ** ಖ್ಯಾತ ವಿಮರ್ಶಕರು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತಿ ಮಾಜಿ ಅಧ್ಯಕ್ಷ, ಕನ್ನಡ-ಕನ್ನಡ ನಿಘಂಟು ರಚನಾ ಸಮಿತಿಯ ಮಾಜಿ ಅಧ್ಯಕ್ಷ, ಸಂಪಾದಕ ನಿಧನರಾದರು.

೩. ೧೦-೧೨-೨೦೧೩ ಯದುವಂಶದ ಕೊನೆಯ ಕುಡಿ **ಶ್ರೀ ಶ್ರೀಕಂಠದತ್ತ ನರಸಿಂಹರಾಜ ಒಡೆಯರ್** (೬೦) ಹೃದಯಾಘಾತ ದಿಂದ ಬೆಂಗಳೂರಿನಲ್ಲಿ ನಿಧನರಾದರು.

೪. ೨೩-೧೨-೧೩ ರಾಷ್ಟ್ರಕವಿ **ಡಾ॥ ಜಿ.ಎಸ್.ಶಿವರುದ್ರಪ್ಪ** ನಿಧನ.

೫. ೩೦-೧೨-೨೦೧೩ ಹಿರಿಯ ಸಾಹಿತಿ **ಟಿ. ಮಹಾಬಲೇಶ್ವರ** (೮೬) ಬೇದೂರು ಗ್ರಾಮದಲ್ಲಿ ಹೃದಯಾಘಾತದಿಂದ ನಿಧನ ಹೊಂದಿದರು

## ಅಭಿನಂದನೆಗಳು

೧. ೮-೧೦-೨೦೧೩ 'ವರ್ಧಮಾನ ಪ್ರಶಸ್ತಿ (೨೦೧೨) ಬೆಳ್ಳೆಣ್ಣಿನ ಡಾ॥ ಜಿ. ಜನಾರ್ಧನ ಭಟ್ ಅವರು ಬರೆದಿರುವ 'ಉತ್ತರಾಧಿಕಾರ' ಕಾದಂಬರಿಗೆ, ಕಸ್ತೂರಿ ಶಂಕರಿಬಾಯರಿಯವರ ಕಥಾಸಂಕಲನಕ್ಕೆ ಉದಯೋನ್ಮುಖ ಸಾಹಿತ್ಯ ಪ್ರಶಸ್ತಿ ಲಭಿಸಿದೆ.

೨. ೨೩-೧೦-೨೦೧೩ ನೃಪತುಂಗ ಸಾಹಿತ್ಯ ಪ್ರಶಸ್ತಿ: (೨೦೧೨) ಡಾ॥ ಬರಗೂರು ರಾಮಚಂದ್ರಪ್ಪ ಅವರಿಗೆ ಈ ಪ್ರತಿಷ್ಠಿತ ಪ್ರಶಸ್ತಿ ಸಂದಿದೆ.

೩. ೧೮-೧೦-೨೦೧೩ ಅಜಂತಾ ಇಂಟರ್ ನ್ಯಾಷನಲ್ ಕಲ್ಚರಲ್ ಎಜುಕೇಷನ್ ಸೊಸೈಟಿ ತನ್ನ ೩೦ನೇ ವಾರ್ಷಿಕೋತ್ಸವದಂದು ಅಜಂತಾ ಸೇವಾರತ್ನ ಪ್ರಶಸ್ತಿಯನ್ನು ಎಂ. ಎಚ್. ಕೃಷ್ಣಯ್ಯ, ಶ್ರೀ ಎಸ್. ವಿ. ಶ್ರೀನಿವಾಸರಾವ್, ಡಾ॥ ಪಿ. ವಿ. ನಾರಾಯಣ ಅವರಿಗೆ ನೀಡಿ ಪುರಸ್ಕರಿಸಿದೆ. ಖ್ಯಾತ ಸಂಶೋಧಕ ಡಾ॥ ಎಂ. ಚಿದಾನಂದಮೂರ್ತಿ ಅವರಿಗೆ 'ಅಜಂತಾ ರಾಷ್ಟ್ರ ರತ್ನ' ಪ್ರಶಸ್ತಿ ನೀಡಿ ಗೌರವಿಸಿದೆ.

೪. ೧೬-೧೧-೨೦೧೩ ಭಾರತರತ್ನ ಪ್ರಶಸ್ತಿಯನ್ನು ಡಾ॥ ಸಿ.ಎನ್.ಆರ್. ರಾವ್ ಮತ್ತು ಕ್ರಿಕೇಟ್ ಆಟಗಾರ ಶ್ರೀ ಸಚಿನ್ ತಂಡೂಲ್ಕರ್ ಅವರಿಗೆ ನೀಡಿ ಗೌರವಿಸಿದೆ.

೫. ೧೫-೧೧-೨೦೧೩ ಶ್ರೀ ಪಿ. ವೈ. ರಾಜೇಂದ್ರ ಕುಮಾರ್ (ನಿವೃತ್ತ ಗ್ರಂಥಾಲಯ ಇಲಾಖೆಯ ನಿರ್ದೇಶಕರು) ಇವರನ್ನು ಕಲ್ಕತ್ತ ರಾಷ್ಟ್ರೀಯ ಗ್ರಂಥಾಲಯಕ್ಕೆ ಮಹಾನಿರ್ದೇಶಕರನ್ನಾಗಿ ಕೇಂದ್ರ ಸರ್ಕಾರ ೩ ವರ್ಷಗಳ ಅವಧಿಗೆ ನೇಮಿಸಿದೆ.

೬. ೧೯-೧೧-೨೦೧೩ ಕನಕಶ್ರೀ ಪ್ರಶಸ್ತಿ (೨೦೧೩) ಬಿಜಾಪುರದ ಶ್ರೀ ಕೃಷ್ಣ ಕೊಲ್ಹಾರ ಕುಲಕರ್ಣಿ ಅವರಿಗೆ ಸಂದಿದೆ.

ಕನಕಶ್ರೀ ಪ್ರಶಸ್ತಿ (೨೦೧೨) ಖ್ಯಾತ ಸಾಹಿತಿ ಶ್ರೀ ಕಾ. ತಾ. ಚಿಕ್ಕಣ್ಣ ಅವರಿಗೆ ಸಂದಿದೆ.

೭. ೫-೧೨-೨೦೧೩ ಮಡಿಕೇರಿಯಲ್ಲಿ ನಡೆಯಲಿರುವ ೮೦ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರನ್ನಾಗಿ ಖ್ಯಾತ ಲೇಖಕ ನಾ. ಡಿಸೋಜಾ ಆಯ್ಕೆಗೊಂಡಿದ್ದಾರೆ.

೮. ೧೮-೧೨-೨೦೧೩ 'ಪಂಪ ಪ್ರಶಸ್ತಿ' (೨೦೧೨) ಭಾಷಾ ವಿಜ್ಞಾನ ಡಾ॥ ಡಿ. ಎನ್. ಶಂಕರಭಟ್ ಅವರಿಗೆ ನೀಡಲು ಸರ್ಕಾರ ಘೋಷಿಸಿದೆ.

೯. ೧೮-೧೨-೨೦೧೩ ನಾಡೋಜ ಪ್ರಶಸ್ತಿ (೨೦೧೩)ಗೆ ನಿವೃತ್ತ ನ್ಯಾಯಮೂರ್ತಿ, ಮಾಜಿ ಲೋಕಾಯುಕ್ತ, ನ್ಯಾಯಮೂರ್ತಿ, ಸಾಹಿತಿ ಪ್ರೊ॥ ಕೊ. ಚೆನ್ನಬಸಪ್ಪ ಹಾಗೂ ಬೆಂಗಳೂರಿನ ಇಸ್ರೋ ಕೇಂದ್ರದ ನಿರ್ದೇಶಕ ಎಸ್. ಕೆ. ಶಿವಕುಮಾರ್ ಆಯ್ಕೆಗೊಂಡಿದ್ದಾರೆ.

೧೦. ೧೯-೧೨-೨೦೧೩ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೨೦೧೨) ಡಾ॥ ಪಿ. ಎನ್. ರಾಮಚಂದ್ರನ್ ಅವರ ಕೃತಿ 'ಆಖ್ಯಾನ ವ್ಯಾಖ್ಯಾನ' ಕೃತಿಗೆ ಸಂದಿವೆ.

೧೧. ೨೯-೧೨-೨೦೧೩ ಕುವೆಂಪು ರಾಷ್ಟ್ರೀಯ ಪ್ರಶಸ್ತಿ ೧೦೯ನೇ ಜನ್ಮದಿನೋತ್ಸವದಂದು ಮಲೆಯಾಳಂ ಹಿರಿಯ ಸಾಹಿತಿ ಕೆ. ಸಚ್ಚಿದಾನಂದನ್ ಅವರಿಗೆ ಪ್ರಪ್ರಥಮ ಕುವೆಂಪು ರಾಷ್ಟ್ರೀಯ ಪುರಸ್ಕಾರ ಸಂದಿದೆ.

ಅಚ್ಚಾದ ಪುಸ್ತಕ — ತೆರೆದ-ಅಂಚೆ



ಶ್ರೀಮತಿ/ಶ್ರೀ............................................................

............................................................

............................................................

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭

ಮುದ್ರಕರು : ಇಳಾ ಮುದ್ರಣ, ನಂ. ೩೬, ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು-೨೬. ✆ ೨೬೭೫೫೭೧೯೫